ಪ್ರೊ॥ ಎಚ್.ಆರ್.ರಘುನಾಥ ಭಟ್ *

# ಸ್ವಾದಿಯಲ್ಲಿ ಮತ್ತೊಂದು ಶಿಲಾಶಾಸನ ಶೋಧನೆ

'ಸ್ವಾದಿ ಅರಸುಮನೆತನ' ಕನ್ನಡನಾಡಿನ ಅದರಲ್ಲೂ ಉತ್ತರಕನ್ನಡ ಪ್ರದೇಶದ ಪ್ರತಿಷ್ಠಿತ ರಾಜವಂಶಗಳಲ್ಲಿ ಒಂದಾಗಿದ್ದು, ವಿಜಯನಗರ, ಆದಿಲ್‌ಶಾಹಿ, ಮತ್ತು ಪ್ರಾದೇಶಿಕ ಸಂಸ್ಕೃತಿಗಳನ್ನು ಸಮನ್ವಯಿಸಿ ಸಕಲ ಸಮಾಜೋ-ಧಾರ್ಮಿಕ ಮೌಲ್ಯಗಳನ್ನು ಎತ್ತಿಹಿಡಿದದ್ದು ಶಾಸನ ಮತ್ತು ಸಾಹಿತ್ಯಕ ಆಧಾರಗಳಿಂದ, ವಾಸ್ತು ಶಿಲ್ಪ ಕಲಾಕೃತಿಗಳಿಂದ ರುಜುವಾತಾಗುತ್ತದೆ. ಈ ಮನೆತನದ ಸಾಂಸ್ಕೃತಿಕ ಮುದ್ರೆ ಆ ಪ್ರದೇಶದ ಮೇಲೆ ಅದೆಷ್ಟು ಚೆನ್ನಾಗಿ ಅಚ್ಚೊತ್ತಿದೆ ಎಂಬುದನ್ನು ನೋಡಬೇಕಾದರೆ ಸ್ವಾದಿ ಬನವಾಸಿ ಸುತ್ತಮುತ್ತಣ ಶಾಸನಗಳನ್ನು ವ್ಯಾಸಂಗಮಾಡಬೇಕು, ಗುಡಿಗುಂಡಾರಗಳನ್ನು ನೋಡಬೇಕು. ಹಾಗೆ ಸಾಹಿತ್ಯ, ಜಾನಪದ, ಕೈಫಿಯತ್ತು ಮತ್ತಿತರ ಆಕರಗಳನ್ನು ಪರಿಶೋಧಿಸಬೇಕು.

ಸ್ವಾದಿ ಅರಸುಮನೆತನಕ್ಕೆ ಸಂಬಂಧಿಸಿದಂತೆ, ಸ್ವಾದಿ ಮತ್ತು ಅದರ ಸುತ್ತಮುತ್ತಲಿನ ಸ್ಥಳಗಳಲ್ಲಿ ಈವರೆಗೆ ಇಪ್ಪತ್ತೊಂಬತ್ತು ಶಾಸನಗಳು ಲಭ್ಯವಿದ್ದು, ಅವನ್ನು ಭಾರತ ಶಾಸನ ತಜ್ಞರ ಇಲಾಖೆಯ ನಿರ್ದೇಶಕರಾದ ಶ್ರೀ ಎಂ. ಎನ್. ಕಟ್ಟಿಯವರು ಈಗಾಗಲೇ ಪ್ರಕಟಿಸಿದ್ದಾರೆ. ಅವುಗಳ ಪಾಠ ಹಾಗೂ ಸಾರಾಂಶಗಳನ್ನು 'ಸ್ವಾದಿ ಅರಸುಮನೆತನ' ಎಂಬ ಕೃತಿಯಲ್ಲಿ ಪ್ರಕಟಮಾಡಿ ಉಪಕರಿಸಿದ್ದಾರೆ. ಈಚಿನ ನಮ್ಮ ಸ್ವಾದಿ ಕ್ಷೇತ್ರಕಾರ್ಯದಲ್ಲಿ ಒಂದು ಶಿಲಾಶಾಸನವನ್ನು ಗದ್ದುಗೆ ಮಠ/ಮನೆಯೆಂದು ಹೇಳಲಾದ ಐತಿಹಾಸಿಕ ಸ್ಥಳದಿಂದ ತೀರ ದೂರವಿಲ್ಲದ 'ನಾಗಜೆರಿ' ಎಂಬ ನೀರಾವರಿ ನೆಲೆಯಲ್ಲಿ ಪರಿಶೋಧಿಸಲಾಯಿತು. ಜೊತೆಗೆ ಆ ಭೂಮಿಗೆ ಸಂಬಂಧಿಸಿದಂತೆ ನಾಲ್ಕು ಮೂಲೆಗಳಲ್ಲಿ ನಾಲ್ಕು ಸುಂದರವಾದ ಲಿಂಗಮುದ್ರೆ ಕಲ್ಲುಗಳನ್ನು ಪತ್ತೆಮಾಡಲಾಗಿದೆ. ಅಷ್ಟೇಅಲ್ಲ, ಈಗ ಬೆಳೆಸಿರುವ ತೋಟದ ಒಂದು ಮೂಲೆಯಲ್ಲಿ ಸ್ವಾದಿ ಅರಸರಕಾಲದ ಒಂದು ಪುಟ್ಟ ಗುಡಿಯನ್ನು, ಸಂಪೂರ್ಣವಾಗಿ ಶಿಲಾಮಯ ಕಟ್ಟಡವನ್ನು, ಅದರ ಎಲ್ಲ ವಿವರಗಳೊಂದಿಗೆ ಗೊತ್ತು ಹಚ್ಚಲಾಯಿತು.

ಪ್ರಸ್ತುತ ಸುಮಾರು ಇಪ್ಪತ್ನಾಲ್ಕು ಸಾಲುಗಳುಳ್ಳ ಕನ್ನಡ ಶಾಸನವನ್ನು ಈಶ್ವರ ಸಂವತ್ಸರದ ಭಾದ್ರಪದ ಬಹುಳ ಹನ್ನೆರಡರಲ್ಲಿ ನಾಗಜೆರಿ ಚೌಕಿಯ ಚೆನ್ನಬಸಪ್ಪನವರು ಹೊರಡಿಸಿದ್ದು ಸ್ಪಷ್ಟವಾಗಿ ದಾಖಲಿಸಲಾಗಿದೆ. ಇದು ಮುಖ್ಯವಾಗಿ ನಾಗಜೆರಿ ನೀರನ್ನು ಸಾರ್ವಜನಿಕರು ಬಳಸುವುದಕ್ಕೆ ಸಂಬಂಧಿಸದಂತೆ ಕೆಲ ಸಂಗತಿಗಳನ್ನು, ಪ್ರಾಯಶಃ ಎದ್ದ ಸಮಸ್ಯೆಗಳನ್ನು ಎತ್ತಿ ಹೇಳುತ್ತದೆ. ಅದೇ ಧ್ವನಿಯಲ್ಲಿ ಆ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸುತ್ತದೆ. ಆದರೆ ಶಾಸನಪಾಠದ ಕೊನೆಯಭಾಗ, ಮುಖ್ಯವಾಗಿ ಹತ್ತೊಂಬತ್ತನೆಯ ಸಾಲಿನಿಂದ ಇಪ್ಪತ್ತನಾಲ್ಕನೆಯ ಸಾಲಿನವರೆಗೆ ತ್ರುಟಿತವೂ ಅಸ್ಪಷ್ಟವೂ ಆಗಿರುವುದರಿಂದ ಅದರ ಆಶಯ ಗೊತ್ತಾಗುತ್ತಿಲ್ಲ.

ಶಾಸನದ ಶಿರೋಶಿಲ್ಪದಲ್ಲಿ ಲಿಂಗ ನಂದಿ, ಸೂರ್ಯ, ಚಂದ್ರ ಮುಂತಾದ ಉಬ್ಬುಶಿಲ್ಪಗಳನ್ನು ನೋಡಬಹುದು. ಶಾಸನ ಶಿಲೆಯಾಗಲಿ, ಅದರ ಮೇಲೆ ಕಂಡರಿಸಿದ ಅಕ್ಷರಗಳಾಗಲಿ ಹೇಳಿಕೊಳ್ಳುವಷ್ಟು ಸುಂದರವಾಗಿಲ್ಲ. ವಾಸ್ತವಿಕವಾಗಿ ವಿಜಯನಗರೋತ್ತರ ಕಾಲದ ಹೆಚ್ಚಿನ ಶಿಲಾಶಾಸನಗಳು ಈ ಭಾಗದಲ್ಲಿ ಕಂಡುಬರುವಂತೆ ಲಿಪಿಸೌಂದರ್ಯಕ್ಕಾಗಲಿ, ಶಾಸನ ಪಾಠ ಸೌಂದರ್ಯಕ್ಕಾಗಲಿ

*ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಶಾಸನ ಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

ಹೆಸರುವಾಸಿ ಆಗಿಲ್ಲ. ಅಕ್ಷರ ಸ್ಖಾಲಿತ್ಯ, ವ್ಯಾಕರಣದೋಷ, ಭಾಷಿಕ ದೋಷಗಳು ಅಲ್ಲಲ್ಲಿ ಕಂಡುಬರುತ್ತವೆ. ಸಾಲದಕ್ಕೆ ಬಳಸಿದ ಶಿಲೆಕೂಡ ಅಷ್ಟು ಪರಿಶುದ್ಧವಾಗಿಲ್ಲ. ಸ್ಥಳೀಯವಾಗಿ ಲಭ್ಯವಿರುವ ಹೊಳೆಕಲ್ಲನೇ ಬಳಸಲಾಗಿದೆ. ಇಷ್ಟಾಗಿಯೂ ಶಾಸನಗಳು ಸಮಕಾಲೀನ, ಅಧಿಕೃತ, ದಾಖಲೆಗಳಾಗಿರುವ ಹಿನ್ನೆಲೆಯಲ್ಲಿ ಹದಿನೆಂಟನೆಯ ಶತಮಾನದಲ್ಲೂ ಈ ಮಾತಿಗೆ ಪುಷ್ಟಿನೀಡುವ ಮಾತಿಗೆ ಪೂರಕವಾಗಿ ಈ ಶಾಸನ ನಮಗೆ ಈಗ ಲಭ್ಯವಾಗಿದೆ. ಅದರ ಸದ್ಯಕ್ಕೆ ಓದಿದ ಪಾಠವನ್ನು ಈ ಕೆಳಗೆ ನೀಡಲಾಗಿದೆ.

### ಶಾಸನ ಪಾಠ

೧ ಯೀಶ್ವರ ಸಂವತ್ಸರದ ಭಾದ್ರಪದ ಬ ೧೨ಲ್ಲು ನಾಗ
೨ ಜೆರಿ ಚಲುಕಿ ಚೆಂನಬಸಪ್ಪನವರೂ ಬರಸಿದ ಸಿಲಾ
೩ ಶಾಸನಾ ಯೀ ನಾಗಜೆರಿ ಉದುಕಉ ಅನಾದಿ ಲಾರ
೪ ಭ್ಯ ಸಕಲ ಜಾತಿಯು ಉದಕ ಬಳಸುತಿತ್ತು(ದ್ದು) ಆ ಮೇಲೆ
೫ ನಾಲು ಚಲುಕಿ ಕಟ್ಟಿಕೊಂಡೆಉಯಂತ ಅರಸು
೬ ಗಳಿಗೆ ಹೇಳಿಕೊಂಡಲ್ಲಿ ಆ ನಾಗಜರಿ ಉದುಕ
೭ ಉ ಮಂದಿಬಳಸುವದಕೆ ಬಿಟ್ಟು ಲಿಂಗಮುದ್ರೆ ಸ್ಥಾ
೮ ಪಿತ ಮಾಡಿಕೊಡೆಯಂತ ಸಮುಸ್ತ ಗುರಕಾರರಿ
೯ ಗೂ ಹೇಳಿದರು. ಆ ಮೇಲೆ ನಾಉಸ್ಥಳಸ್ವಲ್ಪವಾಗು
೧೦ ತ್ತದೆಯಂಬದರಿಂದ ಸಕಲ ಜಾತಿಯು ಉದಕವ(ಸ)
೧೧ ರ್ವ ಪ್ರಮಾಣು ಬಳಸಬಹುದು ಅಗಣಿವೈವರಿಗೆ
೧೨ ನಿರ್ಬಂದಾ ಮಾಡಿದವರೂ ಗುರುದ್ರೋಹಿಗಳು ಯಂ
೧೩ ತನಾವಾಗಿ ಹೇಳಿದರಿಂದ ಆಗ ಲಿಂಗಮುದ್ರೆ ಸ್ಥಾಪಿ
೧೪ ತಕೆ ಸರಪಾರದಾರ ಮಹಲಿಂಗಯ್ಯನ ಕಳುಹಿ
೧೫ ಹಾಕಿಸಿಕೊಟ್ಟರು ಹೀಗೆ ಮಾಡಿ, ಮುಂದೆ ಚೆಂದ್ರ
೧೬ ಸೂರ್ಯ್ಯ ಯಿಹಾ ಪರಿಯಂತ್ರ ಯಾರಾದ[illegible]
೧೭ ಹಸ್ತಾಂತರ ಯಾಚಉಕಿ ಅಧಿಕಾರಪ್ಪ ಮಾಡುವಲ್ಲಿಯಾರಾ
೧೮ ದರೂನಾಗ ಜೆರಿಯ ಉದಕವ ಸರ್ವಜಾ[illegible]ರ್ಯದ
೧೯ ವರು . . . . . . . . . . . . . . .
೨೦ . . . . . . . . . . . . . . .
೨೧ . . . . . . . . . . . . . . .
೨೨ . . . . . . . . . . . . . . .
೨೩ . . . . . . . . . . . . . . .
೨೪ . . . . . . . . . . . . . . .(ತ್ರುಟಿತ)

ಈ ಶಾಸನಪಾಠದ ಆಶಯ, ತ್ರುಟಿತಭಾಗವನ್ನು ಬಿಟ್ಟು, ಸರಳವೂ ಆಗಿರುವಂತೆ ಸ್ಪಷ್ಟವಾಗಿದೆ. ಚೌಕಿಚನ್ನಬಸಪ್ಪನವರು ಹೊರಡಿಸಿದ ಖಾಸಗಿ ಶಿಲಾಶಾಸನ ಇದಾಗಿದೆ. ಸ್ಥಳೀಯವಾಗಿ ಇಂದಿಗೂ ನೋಡಸಿಗುವ 'ನಾಗಝರಿ' ಜಲಾಶಯದ ನೀರಿನ ಬಳಕೆಗೆ ಸಂಬಂಧಿಸಿದೆ. ಸಕಲ ಜಾತಿಧರ್ಮದವರೂ ಅದನ್ನು ಬಹುಕಾಲದಿಂದಲೂ ಬಳಸುತ್ತ ಬಂದಿದ್ದರು. ಅದಕ್ಕೊಂದು ಚೌಕಿ ಕಟ್ಟಿಕೊಂಡಾಗ ತುಸು ಅನನುಕೂಲವಾಗಿರ ಬಹುದು. ನಾಗಜರಿ ನೀರನ್ನು ಮಂದಿ (ಜನಸಾಮಾನ್ಯರು) ಬಳಸುವುದಕ್ಕೆ ಬಿಟ್ಟು ಉಳಿದ ಜಾಗಕ್ಕೆ ಲಿಂಗಮುದ್ರೆ ಹಾಕಿ ಕೊಡಿರೆಂದು ಸಮುಸ್ತಗುರಿಕಾರರಿಗೆ ಹೇಳಿದರು. ಆಮೇಲೆ ಸ್ಥಳ ಸ್ವಲ್ಪವಾಗುತ್ತದೆ ಯೆಂಬುದರಿಂದಾಗಿ ಸಕಲ ಜಾತಿಯವರೂ ನೀರನ್ನು ಬಳಸ ಬಹುದೆಂದು ತೀರ್ಮಾನಿಸಿದರು. ಇದು ತುಂಬ ಸ್ವಾರಸ್ಯಕರ ಸಂಗತಿ. ಸಾಂಸ್ಕೃತಿಕ ಇತಿಹಾಸದಲ್ಲಿ ಈ ಬಗೆಯ ಸಂಗತಿಗಳು ನಮ್ಮ ಕುತೂಹಲವನ್ನು ಇನ್ನಷ್ಟು ಕೆರಳಿಸುತ್ತದೆ.